# ಇತಿಹಾಸವನ್ನು ಏಕೆ ಓದಬೇಕು?

**(1998)**

**ಪೀಟರ್ ಸ್ಟರ್ನ್ಸ್**

ಜನರು ವರ್ತಮಾನದಲ್ಲಿ ಬದುಕುತ್ತಾರೆ. ಭವಿಷ್ಯವನ್ನು ಕುರಿತು ಚಿಂತಿಸುತ್ತಾರೆ ಮತ್ತು ಯೋಜಿಸುತ್ತಾರೆ. ಆದಾಗ್ಯೂ ಇತಿಹಾಸ ಎಂಬುದು ಗತಕಾಲದ ಅಧ್ಯಯನ. ವರ್ತಮಾನದ ಬದುಕಿನ ಒತ್ತಡಗಳ ಜೊತೆಗೆ ಮುಂದೇನು ಎಂಬುದರ ನಿರೀಕ್ಷೆಯಲ್ಲಿರುವಾಗ ಆಗಿಹೋದುದರ ಕುರಿತು ಕಳಕಳಿ ಏಕೆ ಬೇಕು? ಅಪೇಕ್ಷಣೀಯ ಹಾಗೂ ಉಪಲಬ್ಧವಿರುವ ಜ್ಞಾನದ ಎಲ್ಲ ಶಾಖೆಗಳ ಮಧ್ಯೆ ಕನಿಷ್ಠ ಸ್ವಲ್ಪ ಇತಿಹಾಸವನ್ನು ಅಧ್ಯಯನ ಮಾಡುವುದರ ಮೇಲೆ - ಬಹಳಷ್ಟು ಅಮೆರಿಕಾದ ಶೈಕ್ಷಣಿಕ ಕಾರ್ಯಕ್ರಮಗಳಂತೆ - ಒತ್ತಾಯವೇಕೆ? ಅಲ್ಲದೆ ಬಹಳಷ್ಟು ವಿದ್ಯಾರ್ಥಿಗಳಿಗೆ ಅಗತ್ಯಕ್ಕಿಂತ ಹೆಚ್ಚು ಇತಿಹಾಸದ ಅಧ್ಯಯನವನ್ನು ಮಾಡಲು ಒತ್ತಾಯಿಸುವುದು ಏಕೆ?

ಯಾವುದೇ ವಿಷಯದ ಅಧ್ಯಯನ ಸಮರ್ಥನೆಯುತ (justification) ವಾಗಿರಬೇಕು: ಅದನ್ನು ಏಕೆ ಅಧ್ಯಯನ ಮಾಡಬೇಕು ಎಂಬುದಕ್ಕೆ ಅದರ ಪ್ರವರ್ತಕರು ವಿವರಣೆಗಳನ್ನು ನೀಡಬೇಕು. ಬಹಳಮಟ್ಟಿಗೆ ಸ್ವೀಕೃತವಾದ ಜ್ಞಾನ ಶಿಸ್ತುಗಳು – ಖಂಡಿತವಾಗಿಯೂ ಇತಿಹಾಸ ಅವುಗಳಲ್ಲಿ ಒಂದು - ಒಳಗೊಂಡಿರುವ ವಿಷಯ ಮಾಹಿತಿ ಮತ್ತು ಅದರ ಆಲೋಚನಾ ವಿಧಾನಗಳನ್ನು ಇಷ್ಟಪಡುವ ಕಾರಣಕ್ಕಾಗಿ ಅದು ಕೆಲವರನ್ನು ಆಕರ್ಷಿಸುತ್ತದೆ. ಆದರೆ ಇತಿಹಾಸದ ವಿಷಯಕ್ಕೆ ಸ್ವಯಂಪ್ರೇರಿತವಾಗಿ ಆಕರ್ಷಿತರಾಗದ ಮತ್ತು ಅದರ ಬಗ್ಗೆ ತಲೆಕೆಡಿಸಿಕೊಳ್ಳಲು ಬಯಸದಿರುವವರಿಗೆ ಅದನ್ನು ಓದುವ ಹಿಂದಿರುವ ಉದ್ದೇಶವೇನು ಎಂದು ತಿಳಿಯುವುದರ ಅಗತ್ಯವಿದೆ.

ಈ ಇತಿಹಾಸಜ್ಞರು ಹೃದಯವನ್ನು ಕಸಿ ಮಾಡುವುದಿಲ್ಲ, ಅಥವಾ ಹೆದ್ದಾರಿಯ ವಿನ್ಯಾಸ ಯೋಜನೆಯನ್ನು ಅವರು ಸುಧಾರಿಸುವುದಿಲ್ಲ, ಅಥವಾ ಅಪರಾಧಿಗಳನ್ನು ಬಂಧಿಸುವುದಿಲ್ಲ. ಶಿಕ್ಷಣವು ಹೆಚ್ಚು ಪ್ರಯೋಜನಕಾರಿಯಾದ ಉದ್ದೇಶಗಳನ್ನು ಸಾಧಿಸಬೇಕು ಎಂದು ಸರಿಯಾಗಿಯೇ ಅಪೇಕ್ಷಿಸುವ ಸಮಾಜದಲ್ಲಿ ಇಂಜಿನಿಯರಿಂಗ್ ಮತ್ತು ವೈದ್ಯಕೀಯಕ್ಕಿಂತ ಇತಿಹಾಸದ ಕಾರ್ಯಗಳನ್ನು ವಿವರಿಸುವುದು ಹೆಚ್ಚು ಕಷ್ಟಕರವಾದೀತು. ನಿಜವಾಗಿ ಇತಿಹಾಸವು ಹೆಚ್ಚು ಉಪಯುಕ್ತವಾದುದು, ಅನಿವಾರ್ಯವಾದುದು, ಆದರೆ ಇತಿಹಾಸದ ಅಧ್ಯಯನದಿಂದ ಉಪಲಬ್ಧವಾಗುವ ಪ್ರಯೋಜನಗಳು ಹೆಚ್ಚು ಸ್ಪಷ್ಟವಾಗಿರುವಂತಹುದಲ್ಲ, ಕೆಲವೊಮ್ಮೆ ಇತರ ಜ್ಞಾನಶಿಸ್ತುಗಳಂತೆ ತಕ್ಷಣದಲ್ಲಿ ಕಾಣುವಂತಹುದೂ ಅಲ್ಲ.

ಹಿಂದಿನ ಕಾಲದಲ್ಲಿ ಇತಿಹಾಸದ ಅಧ್ಯಯನವನ್ನು ಅನೇಕ ಕಾರಣಗಳಿಂದ ಸಮರ್ಥಿಸಿಕೊಳ್ಳಲಾಗುತ್ತಿತ್ತು. ಇಂದು ಅವು ಸ್ವೀಕೃತವಲ್ಲ. ಉದಾಹರಣೆಗೆ, ಕೆಲವು ಐತಿಹಾಸಿಕ ಸಂಗತಿಗಳ ಅರಿವು ವಿದ್ಯಾವಂತರನ್ನು ಅಶಿಕ್ಷಿತರಿಂದ ಪ್ರತ್ಯೇಕಿಸಲು ಸಹಾಯ ಮಾಡಿದೆ ಎಂಬ ಹಿಂದಿನ ನಾಯಕರುಗಳ ನಂಬಿಕೆಯೇ ಇಂದಿನ ಶಿಕ್ಷಣದಲ್ಲಿ ಇತಿಹಾಸಕ್ಕೆ ಸ್ಥಾನವಿರಲು ಒಂದು ಕಾರಣ. ನಾರ್ಮನ್ ಇಂಗ್ಲೆಂಡನ್ನು ವಶಪಡಿಸಿ ಜಯಗಳಿಸಿದ ಇಸವಿಯನ್ನೋ (1066) ಅಥವಾ ಹೆಚ್ಚು ಕಡಿಮೆ ಡಾರ್ವಿನ್ (Darwin) ನ ಕಾಲದಲ್ಲೇ ವಿಕಾಸದ ಸಿದ್ಧಾಂತವನ್ನು ಮುಂದಿಟ್ಟವನು ಯಾರು (Wallace(ವಾಲೆಸ್)) ಎಂಬುದನ್ನೋ ನೆನಪಿನಂಗಳದಿಂದ ತೆರೆದಿಡಬಲ್ಲವ ಉನ್ನತ ವ್ಯಕ್ತಿ - 'ಲಾ ಸ್ಕೂಲ್'ಗೆ ಉತ್ತಮ ವಿದ್ಯಾರ್ಥಿ ಎಂದೋ ಇಲ್ಲವೇ ಉದ್ಯೋಗದಲ್ಲಿ ಬಡ್ತಿಗೆ ಅರ್ಹನೆಂದೋ ಪರಿಗಣಿಸಲಾಗುತ್ತಿತ್ತು. ಚೈನಾದಿಂದ ಸಂಯುಕ್ತ ಸಂಸ್ಥಾನಗಳವರೆಗೆ, ಹಲವಾರು ಸಮಾಜಗಳಲ್ಲಿ, ಐತಿಹಾಸಿಕ ಸಂಗತಿಗಳ ಅರಿವನ್ನೇ ಪರೀಕ್ಷೆಯ ಸಾಧನವಾಗಿ ಬಳಸಿರುವುದುಂಟು. ಈ ಅಭ್ಯಾಸ ಸ್ವಲ್ಪಮಟ್ಟಿಗೆ ಇಂದಿಗೂ ಇದೆ. ದುರದೃಷ್ಟವಶಾತ್, ಇದು ಅರ್ಥವಿಲ್ಲದ ಕಂಠಪಾಠವನ್ನು ಉತ್ತೇಜಿಸುತ್ತದೆ. ಇದು ನಿಜವಾದರೂ ಈ ಜ್ಞಾನಶಿಸ್ತಿಗೆ ಸಂಬಂಧಿಸಿದ ಅಷ್ಟೇನೂ ಆಕರ್ಷಕವಾದ ಅಂಶವಲ್ಲ. ಇತಿಹಾಸವನ್ನು ಓದಬೇಕು ಏಕೆಂದರೆ ಇದು ವ್ಯಕ್ತಿಗಳಿಗೆ ಮತ್ತು ಸಮಾಜಗಳಿಗೆ ಅವಶ್ಯಕ; ಮತ್ತು ಇದು ಸೌಂದರ್ಯದ ಬೀಡು ಸಹ. ಇತಿಹಾಸದ ನಿಜವಾದ ಕಾರ್ಯಗಳನ್ನು ಚರ್ಚಿಸಬಹುದಾದ ವಿವಿಧ ಮಾರ್ಗಗಳಿವೆ - ಏಕೆಂದರೆ ಐತಿಹಾಸಿಕ ಪ್ರತಿಭೆಯಲ್ಲಿ ವೈವಿಧ್ಯತೆ ಇದೆ ಮತ್ತು ಐತಿಹಾಸಿಕ ಅರ್ಥಗಳನ್ನು ತಲುಪಲು ವಿಭಿನ್ನ ಮಾರ್ಗಗಳಿವೆ. ಆದಾಗ್ಯೂ, ಇತಿಹಾಸದ ಪ್ರಯೋಜನವನ್ನು ಕುರಿತ ಎಲ್ಲ ವ್ಯಾಖ್ಯೆಗಳೂ ಎರಡು ಮೂಲಭೂತ ಅಂಶಗಳನ್ನು ಆಧರಿಸಿದೆ.

## ಇತಿಹಾಸವು ಜನರನ್ನು ಮತ್ತು ಸಮಾಜಗಳನ್ನು ಅರ್ಥಮಾಡಿಕೊಳ್ಳಲು ಸಹಾಯಮಾಡುತ್ತದೆ

ಮೊದಲಿಗೆ, ಇತಿಹಾಸವು, ವ್ಯಕ್ತಿಗಳು ಮತ್ತು ಸಮಾಜ ಹೇಗೆ ವರ್ತಿಸುತ್ತದೆ ಎಂದು ತಿಳಿಸುವ ಒಂದು ಮಾಹಿತಿಯ ಭಂಡಾರವೇ ಹೌದು. ಬಹಳಷ್ಟು ಜ್ಞಾನ ಶಿಸ್ತುಗಳು ಈ ದಿಶೆಯಲ್ಲಿ ಪ್ರಯತ್ನಗಳನ್ನು ಮಾಡಿದರೂ, ಇತಿಹಾಸವಿಲ್ಲದೆ ವ್ಯಕ್ತಿ ಮತ್ತು ಸಮಾಜದ ವರ್ತನೆಗಳನ್ನು ಅರ್ಥಮಾಡಿಕೊಳ್ಳುವುದು ಬಹಳ ಕಷ್ಟ. ಕೇವಲ ಪ್ರಸ್ತುತ ದತ್ತಾಂಶಗಳ ಮೇಲೆ ಸಂಪೂರ್ಣವಾದ ಅವಲಂಬನೆಯು ನಮ್ಮ ಪ್ರಯತ್ನಗಳನ್ನು ಅನಾವಶ್ಯಕವಾಗಿ ದುರ್ಬಲಗೊಳಿಸುತ್ತವೆ. ದೇಶ ಶಾಂತಿಯಿಂದಿರುವಾಗ ಐತಿಹಾಸಿಕ ಮಾಹಿತಿಗಳನ್ನು ಬಳಸದೆ, ಯುದ್ಧವನ್ನು ಕುರಿತು ವಿಮರ್ಶಿಸುವುದಾದರೂ ಹೇಗೆ? ಗತಕಾಲದ ಅನುಭವಗಳನ್ನು ಕುರಿತ

ನಮ್ಮ ಅರಿವನ್ನು ಬಳಸದೆ ಅಸಾಧಾರಣ ಪ್ರತಿಭೆಯನ್ನು, ತಾಂತ್ರಿಕ ನಾವೀನ್ಯಗಳ ಪ್ರಭಾವವನ್ನು, ಅಥವಾ ಕೌಟುಂಬಿಕ ಜೀವನವನ್ನು ರೂಪಿಸುವಲ್ಲಿ ನಂಬಿಕೆಗಳ ಪಾತ್ರವನ್ನು ತಿಳಿಯುವುದಾದರೂ ಹೇಗೆ? ಕೆಲವು ಸಾಮಾಜ ವಿಜ್ಞಾನಿಗಳು ಮಾನವನ ವರ್ತನೆಗಳನ್ನು ಕುರಿತು ನಿಯಮಗಳನ್ನು ಅಥವಾ ಸಿದ್ಧಾಂತಗಳನ್ನು ರೂಪಿಸಲು ಪ್ರಯತ್ನಿಸಿದ್ದಾರೆ. ಆದರೆ ಈ ಸಾಧ್ಯತೆಗಳೂ ಸಹ ಜನರು ಹೇಗೆ ವರ್ತಿಸುತ್ತಾರೆ ಎಂಬುದನ್ನು ಕಂಡುಕೊಳ್ಳಲು ಕೆಲವು ಪ್ರಯೋಗ ಆಧರಿತ ಕೃತಕ ಸನ್ನಿವೇಶಗಳನ್ನು ಬಿಟ್ಟರೆ, ಐತಿಹಾಸಿಕ ಮಾಹಿತಿಗಳನ್ನೇ ಆಧರಿಸ ಬೇಕಾಗುತ್ತದೆ. ಸಮೂಹ ಚುನಾವಣೆ, ಮಿಶನರಿ ಚಟುವಟಿಕೆಗಳು, ಅಥವಾ ಸೇನಾ ಒಪ್ಪಂದಗಳು ಮೊದಲಾದ ಸಮಾಜದ ನಡಾವಳಿಗಳನ್ನು ನಿರ್ದಿಷ್ಟ ಪ್ರಯೋಗಗಳಿಗೆ ಒಳಪಡಿಸಲಾಗದು. ಆದ ಕಾರಣ, ಎಷ್ಟೇ ಅಪೂರ್ಣವಾಗಿದ್ದರೂ ಇತಿಹಾಸವೇ ಪ್ರಯೋಗಾಲಯವಾಗಿ ಮತ್ತು ಗತಕಾಲದ ಮಾಹಿತಿಯೇ ಸಾಮಾಜಿಕ ಸಂದರ್ಭಗಳಲ್ಲಿ ನಮ್ಮ ಸಂಕೀರ್ಣ ಮಾನವ ಜಾತಿಯು ಹೀಗೇಕೆ ವರ್ತಿಸುತ್ತದೆ ಎಂದು ಕಂಡುಕೊಳ್ಳುವ ನಮ್ಮ ಅನಿವಾರ್ಯ ಶೋಧದಲ್ಲಿ ಅತ್ಯಂತ ಪ್ರಮುಖವಾದ ಆಧಾರವಾಗಿ ನಮ್ಮ ಸಹಾಯಕ್ಕೆ ಬರಬೇಕು. ಈ ಕಾರಣಕ್ಕಾಗಿಯೇ ನಾವು ಇತಿಹಾಸದಿಂದ ದೂರ ಸರಿಯುವಂತಿಲ್ಲ: ಸಮಾಜಗಳು ಹೇಗೆ ಕಾರ್ಯನಿರ್ವಹಿಸುತ್ತವೆ ಎಂಬುದರ ಅಧ್ಯಯನಕ್ಕೆ ಮತ್ತು ವಿಶ್ಲೇಷಣೆಗೆ ಅಗತ್ಯವಾದ ಏಕೈಕ ವ್ಯಾಪಕ ಸಾಕ್ಷ್ಯಾಧಾರವನ್ನು ಇದು ಒದಗಿಸುತ್ತದೆ. ಸಾಮಾನ್ಯ ಜನಗಳಿಗೂ ತಮ್ಮ ಬದುಕನ್ನು ನಡೆಸಲು ಸಮಾಜದ ಈ ಅರಿವು ಅಗತ್ಯವಾಗಿರುತ್ತದೆ. ಬದಲಾವಣೆಯನ್ನು ಅರ್ಥಮಾಡಿಕೊಳ್ಳಲು ಮತ್ತು ಇಂದು ನಾವು ವಾಸಿಸುತ್ತಿರುವ ಸಮಾಜವು ಹೇಗೆ ಅಸ್ತಿತ್ವಕ್ಕೆ ಬಂದಿತು ಎಂಬುದನ್ನು ಅರ್ಥಮಾಡಿಕೊಳ್ಳಲೂ ಸಹ ಇತಿಹಾಸವು ನಮಗೆ ಸಹಾಯ ಮಾಡುತ್ತದೆ.

ಇತಿಹಾಸವನ್ನು ಒಂದು ಗಂಭೀರ ಅಧ್ಯಯನವಾಗಿಸುವುದನ್ನು ತಪ್ಪಿಸಿಕೊಳ್ಳಲಾಗದು ಎನ್ನಲು ಎರಡನೇ ಕಾರಣ ಮೊದಲನೇ ಕಾರಣಕ್ಕೆ ಅತ್ಯಂತ ಸಮೀಪವಾದುದೇ. ಭೂತಕಾಲವು ವರ್ತಮಾನವನ್ನು ಪ್ರಭಾವಿಸುತ್ತದೆ, ಅಂತೆಯೇ ಭವಿಷ್ಯವನ್ನು ಕೂಡ. ಯಾವುದೇ ಸನ್ನಿವೇಶದಲ್ಲಿ ಒಂದು ಘಟನೆ ಏಕೆ ಸಂಭವಿಸಿತು ಎಂಬುದನ್ನು ತಿಳಿಯಲು ನಾವು ಪ್ರಯತ್ನಮಾಡುವಾಗ - ಅದು ಅಮೇರಿಕನ್ ಕಾಂಗ್ರೆಸ್ಸಿನಲ್ಲಿ ಅಧಿಕಾರದಲ್ಲಿರುವ ರಾಜಕೀಯ ಪಕ್ಷದಲ್ಲಿನ ಬದಲಾವಣೆ ಇರಬಹುದು, ಅಥವಾ ಹದಿಹರೆಯದವರ ಆತ್ಮಹತ್ಯೆಯ ಪ್ರಮಾಣದಲ್ಲಿ ಪ್ರಮುಖ ಬದಲಾವಣೆ ಇರಬಹುದು, ಹಾಗೆಯೇ ಬಾಲ್ಕೆನ್ಸ್ ಅಥವಾ ಮಧ್ಯ ಪೂರ್ವದೇಶಗಳಲ್ಲಿನ ಒಂದು ಯುದ್ಧವಿರಬಹುದು - ನಾವು ಆ ಮೊದಲು ರೂಪುಗೊಂಡ ಅಂಶಗಳ ಕಡೆಗೆ ಗಮನಹರಿಸಬೇಕಾಗುತ್ತದೆ. ಕೆಲವೊಮ್ಮೆ ಒಂದು ಪ್ರಮುಖ ಬೆಳವಣಿಗೆಯನ್ನು ವಿವರಿಸಲು ಇತ್ತೀಚಿನ ಇತಿಹಾಸವು ಸಾಕಾಗಬಹುದು, ಆದರೆ ಸಾಮಾನ್ಯವಾಗಿ ನಾವು ಬದಲಾವಣೆಗಳಿಗೆ ಕಾರಣಗಳನ್ನು ಹುಡುಕುವಾಗ ಅದಕ್ಕೂ ಹಿಂದಿನ ಕಾಲವನ್ನು

ಪರಿಗಣಿಸಬೇಕಾಗುತ್ತದೆ. ಇತಿಹಾಸದ ಅಧ್ಯಯನವನ್ನು ಮಾಡುವುದರ ಮೂಲಕ ಮಾತ್ರವೇ ನಾವು ಬದಲಾವಣೆಯನ್ನು ಗ್ರಹಿಸಲು ಸಾಧ್ಯ; ಇತಿಹಾಸದ ಮೂಲಕ ಮಾತ್ರವೇ ನಾವು ಬದಲಾವಣೆಗೆ ಕಾರಣವಾದ ಅಂಶಗಳನ್ನು ಗ್ರಹಿಸಲು ಸಾಧ್ಯವಾಗುವುದು; ಇತಿಹಾಸದ ಮೂಲಕ ಮಾತ್ರವೇ ನಾವು ಬದಲಾವಣೆಗಳ ಮಧ್ಯೆಯೂ ಒಂದು ಸಂಸ್ಥೆಯ ಅಥವಾ ಸಮಾಜದ ಯಾವ ಅಂಶಗಳು ಉಳಿದುಕೊಂಡಿವೆ ಎಂಬುದನ್ನು ತಿಳಿಯಲು ಸಾಧ್ಯವಾಗುತ್ತದೆ.

## ನಮ್ಮದೇ ಬದುಕಿನಲ್ಲಿ ಇತಿಹಾಸದ ಪ್ರಾಮುಖ್ಯತೆ

ಇತಿಹಾಸದ ಅಧ್ಯಯನದ ಈ ಎರಡು ಮೂಲಭೂತ ಕಾರಣಗಳೇ ನಮ್ಮ ಬದುಕಿನಲ್ಲಿ ಇತಿಹಾಸದ ಹೆಚ್ಚು ನಿರ್ದಿಷ್ಟವಾದ ಮತ್ತು ವೈವಿಧ್ಯಮಯವಾದ ಉಪಯೋಗಗಳನ್ನು ಸ್ಪಷ್ಟಪಡಿಸುತ್ತವೆ. ಸೃಜನಶೀಲವಾಗಿ ನಿರೂಪಿಸಲಾದ ಇತಿಹಾಸವು ಮನಮುಟ್ಟುವುದಾಗಿರುತ್ತದೆ. ಸಾಮಾನ್ಯ ಸಾರ್ವಜನಿಕ ಓದುಗನ ಮನಕ್ಕೆ ಹತ್ತಿರವಾಗುವ ಹಲವಾರು ಇತಿಹಾಸಜ್ಞರಿಗೆ ಬರೆವಣಿಗೆಯಲ್ಲಿ ನಾಟಕೀಯತೆ, ಕುಶಲತೆಯನ್ನು ತರುವ ಮತ್ತು ಜೊತೆಗೆ ನಿಖರತೆಯನ್ನು ಕಾಪಾಡಿಕೊಳ್ಳುವ ಮಹತ್ವ ತಿಳಿದಿರುತ್ತದೆ. ಕಥನಗಳನ್ನು ಒಳಗೊಂಡಿರುವ ಕಾರಣದಿಂದಾಗಿ ನಮಗೆ ಜೀವನಚರಿತ್ರೆ ಮತ್ತು ಮಿಲಿಟರಿಯ ಇತಿಹಾಸವು ಆಸಕ್ತಿದಾಯಕವಾಗಿರುವುದು. ಕಲೆ ಮತ್ತು ಮನರಂಜನೆಯಾಗಿ ಇತಿಹಾಸವು ಸೌಂದರ್ಯ ಪ್ರಜ್ಞೆಯನ್ನೂ ಒಳಗೊಂಡಂತೆ ಮಾನವನನ್ನು ಅರ್ಥಮಾಡಿಕೊಳ್ಳುವ ನಿಜವಾದ ಉದ್ದೇಶವನ್ನು ಪೂರೈಸುತ್ತದೆ. ವ್ಯಕ್ತಿಗಳು ಮತ್ತು ಸಮಾಜ ನಿಜವಾಗಿ ಹೇಗೆ ಬಾಳಿ ಬದುಕಿವೆ ಎಂಬುದನ್ನು ತೋರಿಸುತ್ತಲೇ ಅನ್ಯಕಾಲದ ಮತ್ತು ಸ್ಥಳದ ಮಾನವನ ಅನುಭವಗಳ ಕುರಿತು ಆಲೋಚನೆಗಳನ್ನು ಹುರಿದುಂಬಿಸುವ ಕಥೆಗಳೇ ಸೃಜನಶೀಲವಾಗಿ ರೂಪಿಸಿರುವ ಉತ್ತಮ ಕಥೆಗಳು. ಇದೇ ಸೌಂದರ್ಯಾತ್ಮಕ ಮತ್ತು ಮಾನವೀಯ ಗುರಿಗಳು ಜನರಿಗೆ ಇಂದಿನ ಲೌಕಿಕ ಪ್ರಜ್ಞೆಗಿಂತ ದೂರವಾದ ಗತಕಾಲದ ಇತಿಹಾಸವನ್ನು ಪುನಾರಚಿಸುವ ಪ್ರಯತ್ನದಲ್ಲಿ ತಮ್ಮನ್ನು ತೊಡಗಿಕೊಳ್ಳಲು ಸ್ಫೂರ್ತಿ ನೀಡುತ್ತವೆ. ಕೆಲವೊಮ್ಮೆ ಇತಿಹಾಸಜ್ಞರು ಹೇಳುವ 'ಗತದ ಗತತನ' - ಹಿಂದಿನ ಕಾಲದಲ್ಲಿ ಜನ ಬದುಕನ್ನು ಕಟ್ಟಿಕೊಂಡ ರೀತಿ - ಒಂದು ರೀತಿಯ ಸೌಂದರ್ಯ ಮತ್ತು ಹುರುಪನ್ನು ಒಳಗೊಂಡಿದ್ದು, ಅಂತಿಮವಾಗಿ ಮಾನವನ ಜೀವನ ಮತ್ತು ಸಮಾಜವನ್ನು ಕುರಿತು ಬೇರೊಂದು ದೃಷ್ಟಿಕೋನವನ್ನು ನೀಡುತ್ತದೆ.

## ನೈತಿಕ ತಿಳಿವಳಿಕೆಗೂ ಇತಿಹಾಸ ಕೊಡುಗೆ ನೀಡುತ್ತದೆ

ನೈತಿಕ ಚಿಂತನೆಗೂ ಇತಿಹಾಸ ಭೂಮಿಕೆಯನ್ನೊದಗಿಸುತ್ತದೆ. ಗತಕಾಲದ ವ್ಯಕ್ತಿಗಳ ಹಾಗೂ ಸನ್ನಿವೇಶಗಳ ಕಥೆಗಳನ್ನು ಓದುವುದರಿಂದ ಇತಿಹಾಸದ ವಿದ್ಯಾರ್ಥಿಯು ತನ್ನ ನೈತಿಕ ಪ್ರಜ್ಞೆಯನ್ನು ಪರೀಕ್ಷಿಸಿಕೊಳ್ಳಲು, ಕಷ್ಟಕರ

ಸನ್ನಿವೇಶಗಳಲ್ಲಿ ಈ ಹಿಂದೆ ವ್ಯಕ್ತಿಗಳು ಎದುರಿಸಿದಂತಹ ನಿಜವಾದ ಸಂಕೀರ್ಣತೆಗಳ ಹಿನ್ನಲೆಯಲ್ಲಿ ಅದನ್ನು ಉತ್ತಮಪಡಿಸಲು ಸಾಧ್ಯವಾಗಿಸುತ್ತದೆ. ಕೇವಲ ಕಥೆ ಕಾದಂಬರಿಗಳಲ್ಲದೆ ನಿಜವಾಗಿ ಐತಿಹಾಸಿಕ ಸನ್ನಿವೇಶಗಳಲ್ಲಿ ಪ್ರತಿಕೂಲಗಳನ್ನು ಎದುರಿಸಿದ ವ್ಯಕ್ತಿಗಳು ಇತರರಿಗೆ ಸ್ಫೂರ್ತಿಯನ್ನೊದಗಿಸಲು ಸಾಧ್ಯವಿದೆ. ಗತಕಾಲದ ಅಧ್ಯಯನದ ಈ ಉಪಯೋಗವನ್ನು "ದೃಷ್ಟಾಂತಗಳಿಂದ ಇತಿಹಾಸ ಬೋಧನೆ" ಎಂಬ ನುಡಿಗಟ್ಟು ಸ್ಪಷ್ಟವಾಗಿ ವಿವರಿಸಬಲ್ಲದು. ಇತಿಹಾಸವು ಪ್ರಮಾಣೀಕೃತ ನಾಯಕರು, ಜೀವನದ ನೈತಿಕ ಸಂದಿಗ್ಧತೆಗಳನ್ನು ಯಶಸ್ವಿಯಾಗಿ ಪರಿಹರಿಸಿಕೊಂಡು ಜೀವನ ನಡೆಸಿದ ಇತಿಹಾಸದಲ್ಲಿನ ಮಹನೀಯ ಪುರುಷರ ಮತ್ತು ಮಹಿಳೆಯರ ಅಧ್ಯಯನ ಮಾತ್ರವಲ್ಲದೆ, ಧೈರ್ಯ, ಶ್ರದ್ಧೆ ಅಥವಾ ಸೃಜನಶೀಲವಾದ ಪ್ರತಿಭಟನೆಯ ಪಾಠಗಳನ್ನು ಕಲಿಸಿದ ಸಾಮಾನ್ಯಾತಿಸಾಮಾನ್ಯರ ಅಧ್ಯಯನವೂ ಹೌದು.

## ಇತಿಹಾಸ ಅಸ್ಮಿತೆಯ (Identity) ನ್ನೊದಗಿಸುತ್ತದೆ

ಇತಿಹಾಸವು ಅಸ್ಮಿತೆಯನ್ನೊದಗಿಸುತ್ತದೆ. ಈ ಕಾರಣದಿಂದಲೇ ಎಲ್ಲ ಆಧುನಿಕ ರಾಷ್ಟ್ರಗಳೂ ಒಂದಲ್ಲ ಒಂದು ರೀತಿಯಲ್ಲಿ ಇತಿಹಾಸವನ್ನು ಬೋಧಿಸುವುದನ್ನು ಪ್ರೋತ್ಸಾಹಿಸುತ್ತದೆ ಎನ್ನುವುದು ಪ್ರಶ್ನಾತೀತವಾದುದು. ಐತಿಹಾಸಿಕ ಮಾಹಿತಿಯು ಕುಟುಂಬಗಳು, ಸಮೂಹಗಳು, ಸಂಸ್ಥೆಗಳು ಮತ್ತು ಇಡೀ ದೇಶ ಹಾಗೂ ಅವು ಸಾಮರಸ್ಯವನ್ನು ಕಾಯ್ದುಕೊಳ್ಳುತ್ತಲೇ ಹೇಗೆ ವಿಕಸಿತಗೊಂಡವು ಎಂಬುದಕ್ಕೆ ಆಧಾರಗಳನ್ನು ಒಳಗೊಳ್ಳುತ್ತದೆ. ಬಹಳಷ್ಟು ಅಮೆರಿಕನ್ನರಿಗೆ ತಮ್ಮದೇ ಕುಟುಂಬದ ಇತಿಹಾಸವನ್ನು ಅಧ್ಯಯನ ಮಾಡುವುದೇ ಇತಿಹಾಸದ ಅತಿ ಸ್ಪಷ್ಟವಾದ ಪ್ರಯೋಜನ. ಏಕೆಂದರೆ ಅದು ವಂಶಾವಳಿಯನ್ನು ಮತ್ತು (ಸ್ವಲ್ಪ ಹೆಚ್ಚಿನ ಸಂಕೀರ್ಣ ಮಟ್ಟದಲ್ಲಿ) ಒಂದು ಕುಟುಂಬವು ಹೆಚ್ಚು ವಿಸ್ತಾರವಾದ ಐತಿಹಾಸಿಕ ಬದಲಾವಣೆಗಳ ಜೊತೆಗೆ ಹೇಗೆ ಪರಸ್ಪರ ಪ್ರತಿಕ್ರಿಯಿಸಿದೆ ಎಂಬುದರ ತಿಳಿವಳಿಕೆಗೆ ಆಧಾರವನ್ನು ಒದಗಿಸುತ್ತದೆ. ಕುಟುಂಬದ ಅಸ್ಮಿತೆಯು ಸಾಬೀತಾಗಿ ದೃಢಪಡಿಸಲಾಗುತ್ತದೆ. ಅನೇಕ ಸಂಸ್ಥೆಗಳು, ವ್ಯಾಪಾರ ವಹಿವಾಟುಗಳು, ಸಮುದಾಯಗಳು ಹಾಗೂ ಸಂಯುಕ್ತ ಸಂಸ್ಥಾನದ ಜನಾಂಗೀಯ ಗುಂಪುಗಳಂತಹ ಸಾಮಾಜಿಕ ಘಟಕಗಳು ಇತಿಹಾಸವನ್ನು ಇದೇ ಅಸ್ಮಿತೆಯ ಉದ್ದೇಶಕ್ಕೆ ಬಳಸುತ್ತವೆ. ಕೇವಲ ಪ್ರಸ್ತುತ ನೆಲೆಯಲ್ಲಿ ಅಸ್ಮಿತೆಯನ್ನು ಗುರುತಿಸಿಕೊಳ್ಳುವುದು ಶ್ರೀಮಂತ ಐತಿಹಾಸಿಕ ಹಿನ್ನೆಲೆಯಲ್ಲಿ ಅಸ್ಮಿತೆಯನ್ನು ಸ್ಥಾಪಿಸಿಕೊಳ್ಳುವ ಸಾಧ್ಯತೆಯನ್ನು ಮಂಕುಗೊಳಿಸುತ್ತದೆ. ರಾಷ್ಟ್ರಗಳು ಗುರುತಾಧಾರಿತ ಇತಿಹಾಸವನ್ನು ಬಳಸಿಕೊಳ್ಳುವುದೂ ಉಂಟು, ನಿಂದಿಸುವುದೂ ಉಂಟು. ರಾಷ್ಟ್ರಕಥನವನ್ನು ಹೇಳುವ ಇತಿಹಾಸಗಳು ರಾಷ್ಟ್ರೀಯ ಅನುಭವಗಳ ವಿಶಿಷ್ಟ ಲಕ್ಷಣಗಳಿಗೆ ಒತ್ತು ನೀಡುತ್ತಾ, ರಾಷ್ಟ್ರದ ಮೌಲ್ಯಗಳು ಮತ್ತು ರಾಷ್ಟ್ರೀಯ ನಿಷ್ಠೆಯನ್ನು ಕುರಿತ ಬದ್ಧತೆಯನ್ನು ಮನೆಗೆ ತರಲು ರೂಪಿಸಲಾಗಿರುತ್ತದೆ.

## ಉತ್ತಮ ಪೌರತ್ವಕ್ಕೆ ಇತಿಹಾಸದ ಅಧ್ಯಯನ ಅವಶ್ಯಕ

ಉತ್ತಮ ಪೌರತ್ವಕ್ಕೆ ಇತಿಹಾಸದ ಅಧ್ಯಯನ ಅತಿ ಅವಶ್ಯಕ. ಶಾಲಾ ಪಠ್ಯಕ್ರಮದಲ್ಲಿ ಇತಿಹಾಸಕ್ಕೆ ಸ್ಥಾನ ನೀಡಿರುವುದಕ್ಕೆ ಮುಂದಿಡುವ ಸಾಮಾನ್ಯವಾದ ಸಮರ್ಥನೆ ಇದು. ಪೌರತ್ವದ ಇತಿಹಾಸವನ್ನು ಪರವಾದಿಸುವವರು ಕೆಲವೊಮ್ಮೆ ಮನಮುಟ್ಟುವಂತಹ ಕಥೆಗಳು, ವೈಯಕ್ತಿಕ ಯಶಸ್ಸು ಗಳಿಸಿದ ವ್ಯಕ್ತಿಗಳ ಕಥನಗಳು ಅಥವಾ ನೀತಿಪಾಠಗಳ ಮೂಲಕ ಕೇವಲ ರಾಷ್ಟ್ರೀಯ ಅಸ್ಮಿತೆ ಮತ್ತು ನಿಷ್ಠೆಯನ್ನು ಬೆಳೆಸಲು ಆಶಿಸುತ್ತಾರೆ. ಆದರೆ ಪೌರತ್ವಕ್ಕೆ ಇತಿಹಾಸದ ಮಹತ್ವವು ಈ ಸಂಕುಚಿತ ಗುರಿಗಿಂತ ವಿಸ್ತಾರವಾದುದು ಹಾಗೂ ಕೆಲವು ಸಂದರ್ಭಗಳಲ್ಲಿ ಇದು ಅದಕ್ಕೆ ಸವಾಲನ್ನು ಒಡ್ಡಲು ಬಹುದು.

ನಿಜವಾದ ಪೌರತ್ವಕ್ಕೆ ಅಡಿಪಾಯ ಹಾಕುತ್ತಾ ಇತಿಹಾಸವು -ಒಂದು ಅರ್ಥದಲ್ಲಿ- ಗತಕಾಲದ ಅಧ್ಯಯನದ ಮೂಲಭೂತ ಉಪಯೋಗಗಳ ಕಡೆಗೇ ಮರಳುತ್ತದೆ. ರಾಷ್ಟ್ರೀಯ ಸಂಸ್ಥೆಗಳು, ಸಮಸ್ಯೆಗಳು, ಮತ್ತು ಮೌಲ್ಯಗಳು – ಇವುಗಳ ಹುಟ್ಟನ್ನು ಕುರಿತ ಮಾಹಿತಿಯನ್ನು ಇತಿಹಾಸ ಒದಗಿಸುತ್ತದೆ. ಅಂತಹ ಮಾಹಿತಿಯ ಏಕೈಕ ಮಹತ್ವದ ಭಂಡಾರವೆಂದರೆ ಇತಿಹಾಸ. ಜವಾಬ್ದಾರಿಯುತವಾದ ಪೌರತ್ವಕ್ಕೆ ಅವಶ್ಯವಾದ ಅಂತಾರಾಷ್ಟ್ರೀಯ ಮತ್ತು ತುಲನಾತ್ಮಕ ದೃಷ್ಟಿಕೋನಗಳನ್ನು ಒದಗಿಸುತ್ತಲೇ ರಾಷ್ಟ್ರಗಳು ಇತರ ಸಮಾಜಗಳೊಂದಿಗೆ ಹೇಗೆ ಪರಸ್ಪರ ಸಂಬಂಧವನ್ನು ಬೆಳಸಿದೆ ಎಂಬುದನ್ನು ಕುರಿತೂ ಇತಿಹಾಸ ಆಧಾರಗಳನ್ನು ಒದಗಿಸುತ್ತದೆ. ಅಲ್ಲದೆ, ಪ್ರಜೆಗಳ ಬದುಕನ್ನು ಪ್ರಭಾವಿಸುವ ಇತ್ತೀಚಿನ, ಇಂದಿನ ಹಾಗೂ ಹೊರಹೊಮ್ಮುತ್ತಿರುವ ಅಥವಾ ಹೊರಹೊಮ್ಮಬಹುದಾದ ನಿರೀಕ್ಷಿತ ಬದಲಾವಣೆಗಳ ಹಿಂದಿರುವ ಕಾರಣಗಳನ್ನು ಅರ್ಥಮಾಡಿಕೊಳ್ಳಲು ಇತಿಹಾಸ ಸಹಾಯಮಾಡುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ, ಜವಾಬ್ದಾರಿಯುತ ಸಾರ್ವಜನಿಕ ವರ್ತನೆಗಳಿಗೆ - ಅದು ರಾಷ್ಟ್ರೀಯ ಅಥವಾ ಸಮುದಾಯ ನಾಯಕರಾಗಿಯಾಗಲಿ, ತಿಳುವಳಿಕೆಯುಳ್ಳ ಮತದಾರನಾಗಿಯಾಗಲಿ, ಅರ್ಜಿದಾರನಾಗಿಯಾಗಲಿ ಅಥವಾ ಸರಳ ವೀಕ್ಷಕನಾಗಿಯಾಗಲಿ-ಅಗತ್ಯವಾದ ಚಿಂತನಾ ಅಭ್ಯಾಸವನ್ನು ಪ್ರೋತ್ಸಾಹಿಸುತ್ತದೆ.

## ಇತಿಹಾಸದ ವಿದ್ಯಾರ್ಥಿಯು ಯಾವ ಕೌಶಲಗಳನ್ನು ಬೆಳೆಸಿಕೊಳ್ಳುತ್ತಾನೆ?

ಇತಿಹಾಸದಲ್ಲಿ ಉತ್ತಮ ತರಬೇತಿ ಪಡೆದ, ಗತಕಾಲದ ಮಾಹಿತಿಗಳೊಡನೆ ಹಾಗೂ ಸಾಮಾಜಿಕ ಬದಲಾವಣೆಗೆ ಸಂಬಂಧಿಸಿದ ನಿದರ್ಶನಗಳ ಕುರಿತು ಕೆಲಸ ಮಾಡಲು ಪಳಗಿದ ವಿದ್ಯಾರ್ಥಿ ಅದನ್ನು ಮಾಡಲು ಕಲಿತಿದ್ದಾದರೂ ಹೇಗೆ? ಈ ಪ್ರಕ್ರಿಯೆಯ ಪಟ್ಟಿ ಚಿಕ್ಕದಾದುದೇ ಆದರೂ ಇದರಲ್ಲಿ ಹಲವಾರು ಅತಿಕ್ರಮಿಸುವ ಪ್ರವರ್ಗಗಳು ಸೇರಿವೆ.

ಆಧಾರಗಳನ್ನು ಮೌಲ್ಯಮಾಪನವಾಡುವ ಸಾಮರ್ಥ್ಯ ಇತಿಹಾಸದ ಅಧ್ಯಯನ ವಿವಿಧ ರೀತಿಯ ಸಾಕ್ಷ್ಯಗಳೊಂದಿಗೆ ವ್ಯವಹರಿಸುವ ಮತ್ತು ಅದನ್ನು ಮೌಲ್ಯಮಾಪನ ಮಾಡುವ ಸಾಮರ್ಥ್ಯವನ್ನು ಬೆಳೆಸುತ್ತದೆ. ಇತಿಹಾಸಜ್ಞರು ಸಾಧ್ಯವಾದಷ್ಟೂ ಮಟ್ಟಿಗೆ ಗತಕಾಲವನ್ನು ನಿಖರವಾಗಿ ಬಿಂಬಿಸಲು ಬಳಸುವ ಸಾಕ್ಷ್ಯಗಳು ಇವು. ಹಿಂದಿನ ರಾಜಕೀಯ ನಾಯಕರ ಹೇಳಿಕೆಗಳನ್ನು – ಒಂದು ರೀತಿಯ ಆಧಾರ - ವ್ಯಾಖ್ಯಾನಿಸುವುದನ್ನು ಕುರಿತ ಕಲಿಕೆಯು ಇಂದಿನ ರಾಜಕೀಯ ನಾಯಕರ ಸ್ವಾರ್ಥದ ಮತ್ತು ವಸ್ತುನಿಷ್ಠವಾದ ಹೇಳಿಕೆಗಳ ನಡುವೆ ವ್ಯತ್ಯಾಸವನ್ನು ಗುರುತಿಸುವ ಸಾಮರ್ಥ್ಯವನ್ನು ಬೆಳಸಿಕೊಳ್ಳಲು ಸಹಾಯ ಮಾಡುತ್ತದೆ. ವಿವಿಧ ರೀತಿಯ ಸಾಕ್ಷ್ಯಗಳನ್ನು ಒಗ್ಗೂಡಿಸುವುದರ ಕಲಿಕೆ - ಸಾರ್ವಜನಿಕ ಹೇಳಿಕೆಗಳು, ವೈಯಕ್ತಿಕ ದಾಖಲೆಗಳು, ಸಂಖ್ಯಾತ್ಮಕ ಮಾಹಿತಿಗಳು, ದೃಶ್ಯ ಮಾಹಿತಿಗಳು - ವಿಭಿನ್ನ ದತ್ತಾಂಶಗಳ ಆಧಾರದ ಮೇಲೆ ಸುಸಂಬದ್ಧ ವಾದಗಳನ್ನು ರೂಪಿಸಲು ಅಗತ್ಯವಾದ ಸಾಮರ್ಥ್ಯಗಳನ್ನು ಬೆಳೆಸುತ್ತದೆ. ದಿನನಿತ್ಯದ ಬದುಕಿನಲ್ಲಿ ಎದುರಾಗುವ ಮಾಹಿತಿಗೆ ಸಂಬಂಧಿಸಿದಂತೆಯೂ ಈ ಕೌಶಲವನ್ನು ಅನ್ವಯಿಸಬಹುದು.

**ಪರಸ್ಪರ ವಿರುದ್ಧವಾದ ವ್ಯಾಖ್ಯಾನಗಳನ್ನು ಮೌಲ್ಯಮಾಪನಮಾಡುವ ಸಾಮರ್ಥ್ಯ** ಇತಿಹಾಸವನ್ನು ಕಲಿಯುವುದು ಎಂದರೆ ವಿಭಿನ್ನ ರೀತಿಯ, ಮತ್ತು ಸಾಮಾನ್ಯವಾಗಿ ಪರಸ್ಪರ ವಿರುದ್ಧವಾದ ವ್ಯಾಖ್ಯಾನಗಳನ್ನು ಬೇರ್ಪಡಿಸಿ ಸ್ಪಷ್ಟೀಕರಿಸುವ ಕೌಶಲಗಳನ್ನು ಬೆಳೆಸಿಕೊಳ್ಳುವುದು ಎಂದೇ ಅರ್ಥ. ಸಮಾಜಗಳು ಹೇಗೆ ಕಾರ್ಯನಿರ್ವಹಿಸುತ್ತವೆ - ಐತಿಹಾಸಿಕ ಅಧ್ಯಯನದ ಪ್ರಮುಖ ಗುರಿ - ಎಂಬುದರ ತಿಳಿವಳಿಕೆ ಸ್ವಾಭಾವಿಕವಾಗಿಯೇ ನಿಖರವಾಗಿಲ್ಲ, ಮತ್ತು ಪ್ರಸ್ತುತ ಕಾಲದಲ್ಲಿ ಸಮಾಜದಲ್ಲಿ ಏನಾಗುತ್ತಿದೆ ಎಂಬುದನ್ನು ಅರ್ಥಮಾಡಿಕೊಳ್ಳುವುದರಲ್ಲೂ ನಿಖರತೆ ಇಲ್ಲ ಎಂಬುದೂ ಸತ್ಯವೇ. ಪರಸ್ಪರ ವಿರುದ್ಧವಾದ ವ್ಯಾಖ್ಯಾನಗಳನ್ನು ಗುರುತಿಸುವುದು ಮತ್ತು ಮಾಪನಮಾಡುವುದು ಹೇಗೆ ಎಂಬುದು ಪೌರತ್ವಕ್ಕೆ ಬೇಕಾಗಿರುವ ಅಗತ್ಯವಾದ ಕೌಶಲ, ಮತ್ತು ಇದನ್ನು ಬೆಳೆಸಲು ಇತಿಹಾಸವು, ಮಾನವ ಅನುಭವಗಳ ಚರ್ಚಾಸ್ಪದ ಪ್ರಯೋಗಾಲಯವಾಗಿ, ತರಬೇತಿ ಒದಗಿಸುತ್ತದೆ. ಈ ಒಂದು ವಿಷಯದಲ್ಲಿಯೇ ಐತಿಹಾಸಿಕ ಅಧ್ಯಯನದ ಪೂರ್ಣ ಪ್ರಯೋಜನಗಳು ಕೆಲವೊಮ್ಮೆ ಅಸ್ಮಿತೆಯನ್ನು ನಿರ್ಮಿಸುವ ಗತಕಾಲದ ಕ್ಷುಲ್ಲಕ ಉಪಯೋಗಗಳೊಂದಿಗೆ ಮುಖಾಮುಖಿಯಾಗುತ್ತದೆ. ಗತಕಾಲದ ಸನ್ನಿವೇಶಗಳನ್ನು ಪರಿಶೀಲಿಸುವ ಅನುಭವವು ಒಂದು ಸೃಜನಾತ್ಮಕವಾದ ಚಿಕಿತ್ಸಕವಾದ ದೃಷ್ಟಿಕೋನವನ್ನು ಒದಗಿಸುತ್ತದೆ. ಇದನ್ನು ರಾಷ್ಟ್ರೀಯ ಅಥವಾ ಸಮೂಹದ ಅಸ್ಮಿತೆಯ ವೈಭವೀಕರಣಕ್ಕೆ ಸಂಬಂಧಿಸಿದಂತೆ ಇರುವ ಪಕ್ಷಪಾತಿಯ ಹಕ್ಕುಸ್ಥಾಪನೆಯ ಸಂದರ್ಭಗಳಲ್ಲಿ ಅನ್ವಯಿಸಬಹುದು. ಇತಿಹಾಸದ ಅಧ್ಯಯನವು ಯಾವುದೇ ರೀತಿಯಲ್ಲಿ ನಿಷ್ಠೆ ಅಥವಾ ಬದ್ಧತೆಗಿರುವ ಮಹತ್ವವನ್ನು ನಿರ್ಲಕ್ಷಿಸುವುದಿಲ್ಲ, ಅದರೆ ವಾದಗಳನ್ನು ತೂಗಿ ನೋಡುವ ಅಗತ್ಯವಿದೆ ಎಂದು ಕಲಿಸುತ್ತದೆ. ಮತ್ತು ಇದು ಚರ್ಚೆಯಲ್ಲಿ ತೊಡಗಿಸಿಕೊಳ್ಳಲು

ಹಾಗೂ ಒಂದು ದೃಷ್ಟಿಕೋನವನ್ನು ಪಡೆಯಲು ಅವಕಾಶಗಳನ್ನು ಒದಗಿಸುತ್ತದೆ.

**ಗತಕಾಲದ ಬದಲಾವಣೆಗಳ ಉದಾಹರಣೆಗಳನ್ನು ಮೌಲ್ಯಮಾಪನದ ಅನುಭವ.** ಗತಕಾಲದ ಬದಲಾವಣೆಯ ಉದಾಹರಣೆಗಳನ್ನು ಮೌಲ್ಯಮಾಪನದ ಅನುಭವ ಇಂದಿನ ಸಮಾಜದ ಬದಲಾವಣೆಗಳನ್ನು ಅರ್ಥಮಾಡಿಕೊಳ್ಳಲು ಅತಿ ಅಗತ್ಯವಾದುದು. ನಾವು ಸಾಮಾನ್ಯವಾಗಿ ಕೇಳಿಬರುವ "ನಿರಂತರವಾಗಿ ಬದಲಾಗುತ್ತಿರುವ ಜಗತ್ತಿ"ನಲ್ಲಿ ಇದೊಂದು ಅವಶ್ಯಕ ಕೌಶಲ. ಬದಲಾವಣೆಯ ವಿಶ್ಲೇಷಣೆ ಎಂದರೆ ಅದರ ವ್ಯಾಪ್ತಿ ಮತ್ತು ಮಹತ್ವವನ್ನು ನಿರ್ಧರಿಸಲು ಅಗತ್ಯವಾದ ಸಾಮರ್ಥ್ಯವನ್ನು ಬೆಳೆಸಿಕೊಳ್ಳುವುದು ಎಂದೇ ಅರ್ಥ. ಏಕೆಂದರೆ ಕೆಲವು ಬದಲಾವಣೆಗಳು ಇತರ ಬದಲಾವಣೆಗಳಿಗಿಂತ ಪ್ರಮುಖವಾದುದು. ನಿರ್ದಿಷ್ಟ ಬದಲಾವಣೆಗಳನ್ನು ಗತಕಾಲದ ಕೆಲವು ಸೂಕ್ತ ಉದಾಹರಣೆಗಳೊಂದಿಗೆ ಹೋಲಿಸಿನೋಡುವುದರಿಂದ ಇತಿಹಾಸದ ವಿದ್ಯಾರ್ಥಿಗಳಲ್ಲಿ ಈ ಸಾಮರ್ಥ್ಯವನ್ನು ಬೆಳಸಿಕೊಳ್ಳಲು ಸಹಾಯಕವಾಗುತ್ತದೆ. ಅತ್ಯಂತ ಪರಿಣಾಮಕಾರಿ ಬದಲಾವಣೆಗಳೊಂದಿಗೆ ಜೊತೆಗೂಡಿ ಬರುವ ಗತಕಾಲದೊಂದಿಗಿನ ನಿರಂತರ ಸಂಬಂಧವನ್ನು ಗುರುತಿಸುವ ಸಾಮರ್ಥ್ಯ ಮತ್ತು ಬದಲಾವಣೆಯ ಸಂಭವನೀಯ ಕಾರಣಗಳನ್ನು ಗುರುತಿಸುವ ಕೌಶಲ್ಯವೂ ಸಹ - ಇತಿಹಾಸದ ಅಧ್ಯಯನದಿಂದಲೇ ಬರುವಂತಹುದು. ಇತಿಹಾಸದ ಕಲಿಕೆಯು ಒಂದು ಪ್ರಮುಖ ಅಂಶ – ಉದಾಹರಣೆಗೆ ತಾಂತ್ರಿಕ ನಾವೀನ್ಯ ಅಥವಾ ಉದ್ದೇಶಪೂರ್ವಕವಾಗಿ ಜಾರಿಗೆ ತಂದ ಒಂದು ನೀತಿ - ಬದಲಾವಣೆಗೆ ಕಾರಣವೋ ಅಥವಾ ಸಾಮಾನ್ಯವಾಗಿ ಕಾಣುವಂತೆ ಅನೇಕ ಅಂಶಗಳು ಒಟ್ಟಾಗಿ ಬದಲಾವಣೆಯನ್ನು ಫಲಿಸಿವೆಯೋ ಎಂದು ಗುರುತಿಸಲು ಸಹಾಯಕವಾಗುತ್ತದೆ.

ಒಟ್ಟಾರೆಯಾಗಿ, ಐತಿಹಾಸಿಕ ಅಧ್ಯಯನವು ಅಪರೂಪವಾಗಿ ಕಂಡುಬರುವ, ತಿಳಿವಳಿಕೆಯಿರುವ ಆ ಜೀವಿಯ ಬೆಳವಣಿಗೆಗೆ ನಿರ್ಣಾಯಕವಾದುದು. ಇದು ನಮ್ಮ ರಾಜಕೀಯ ಸಂಸ್ಥೆಗಳ ಹಿನ್ನೆಲೆ ಹಾಗೂ ನಮ್ಮ ಸಾಮಾಜಿಕ ಸ್ವಾಸ್ಥ್ಯವನ್ನು ಪ್ರಭಾವಿಸುವ ಮೌಲ್ಯಗಳು ಮತ್ತು ಸಮಸ್ಯೆಗಳನ್ನು ಕುರಿತ ವಾಸ್ತವಿಕ ಮಾಹಿತಿಯನ್ನು ನೀಡುತ್ತದೆ. ಆಧಾರಗಳನ್ನು ಬಳಸುವ, ವ್ಯಾಖ್ಯಾನಗಳನ್ನು ತೂಗಿ ನೋಡುವ, ಬದಲಾವಣೆಗಳನ್ನು ಮತ್ತು ಸಂಬಂಧಕಗಳನ್ನು ವಿಶ್ಲೇಷಿಸುವ ನಮ್ಮ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ. ಒಬ್ಬ ಇತಿಹಾಸಜ್ಞ ಗತಕಾಲದೊಂದಿಗೆ ವ್ಯವಹರಿಸುವಂತೆ ಯಾರೂ ವರ್ತಮಾನದೊಂದಿಗೆ ವ್ಯವಹರಿಸಲಾರರು. ಈ ಸಾಧನೆಗೆ ಅಗತ್ಯವಾದ ದೃಷ್ಟಿಕೋನದ ಕೊರತೆ ನಮ್ಮಲ್ಲಿದೆ. ಆದರೆ ಐತಿಹಾಸಿಕ ಚಿಂತನಾ ಅಭ್ಯಾಸಗಳನ್ನು ಅನ್ವಯಿಸಿಕೊಂಡು ಈ ದಿಶೆಯಲ್ಲಿ ಮುಂದುವರಿಯಬಹುದು. ಪರಿಣಾಮವಾಗಿ ನಾವು ಉತ್ತಮ ನಾಗರಿಕರಾಗಿ ಕಾರ್ಯನಿರ್ವಹಿಸುತ್ತೇವೆ.

## ಇತಿಹಾಸವು ಕಾರ್ಯಪ್ರಪಂಚದಲ್ಲಿ ಪ್ರಯೋಜನಕಾರಿ

ಕಾರ್ಯಕ್ಷೇತ್ರದಲ್ಲಿ ಇತಿಹಾಸದ ಪ್ರಯೋಜನವಿದೆ. ಇದರ ಅಧ್ಯಯನವು ಉತ್ತಮ ಉದ್ಯೋಗಿಗಳನ್ನು, ವೃತ್ತಿಪರರನ್ನು ಮತ್ತು ರಾಜಕೀಯ ನಾಯಕರನ್ನು ರೂಪಿಸುತ್ತದೆ. ಇತಿಹಾಸಜ್ಞರಿಗೆ ತೆರೆದುಕೊಂಡಿರುವ ಹಲವಾರು ಸ್ಪಷ್ಟ ವೃತ್ತಿಪರ ಉದ್ಯೋಗಗಳು ಗಣನೀಯವಾದವುಗಳು. ಆದರೆ ಇತಿಹಾಸವನ್ನು ಅಧ್ಯಯನ ಮಾಡುವ ಬಹಳಷ್ಟು ಜನರು ವೃತ್ತಿಪರ ಇತಿಹಾಸಜ್ಞರಾಗುವುದಿಲ್ಲ. ವೃತ್ತಿಪರ ಇತಿಹಾಸಜ್ಞರು ಅನೇಕ ಹಂತಗಳಲ್ಲಿ ಬೋಧನಾ ವೃತ್ತಿಯನ್ನು ಕೈಗೊಳ್ಳುತ್ತಾರೆ, ವಸ್ತು ಸಂಗ್ರಹಾಲಯಗಳಲ್ಲಿ ಮತ್ತು ಮಾಧ್ಯಮ ಕೇಂದ್ರಗಳಲ್ಲಿ ಉದ್ಯೋಗ ಮಾಡುತ್ತಾರೆ. ಉದ್ಯಮ ಅಥವಾ ಸಾರ್ವಜನಿಕ ನಿಯೋಗಗಳಿಗಾಗಿ ಐತಿಹಾಸಿಕ ಸಂಶೋಧನೆಯಲ್ಲಿ ನಿರತರಾಗುತ್ತಾರೆ ಅಥವಾ ಹೆಚ್ಚು ಸಂಖ್ಯೆಯಲ್ಲಿ ಬೆಳೆಯುತ್ತಿರುವ ಐತಿಹಾಸಿಕ ಸಲಹಾ ಕೇಂದ್ರಗಳಲ್ಲಿ ಭಾಗವಹಿಸುತ್ತಾರೆ. ಈ ಪ್ರವರ್ಗಗಳು ಇತಿಹಾಸದ ಮೂಲಭೂತ ಕಾರ್ಯಕಲಾಪಗಳನ್ನು ಸಕ್ರಿಯವಾಗಿರಿಸಿಕೊಳ್ಳುವಲ್ಲಿ ಅತ್ಯಂತ ಮಹತ್ವದ್ದಾಗಿರುತ್ತದೆ. ಆದರೆ ಇತಿಹಾಸವನ್ನು ಅಧ್ಯಯನ ಮಾಡುವ ಅನೇಕರು ತಮ್ಮ ತರಬೇತಿಯನ್ನು ಹೆಚ್ಚು ವಿಶಾಲವಾದ ವೃತ್ತಿಪರ ಉದ್ದೇಶಗಳಿಗೆ ಬಳಸಿಕೊಳ್ಳುತ್ತಾರೆ. ಇತಿಹಾಸದ ವಿದ್ಯಾರ್ಥಿಗಳು ತಮ್ಮ ಅನುಭವಗಳು ವಿವಿಧ ವೃತ್ತಿಗಳಲ್ಲಿನ ಉದ್ಯೋಗಗಳಿಗೆ ಹಾಗೂ ಕಾನೂನು ಮತ್ತು ಸಾರ್ವಜನಿಕ ಆಡಳಿತ ಕ್ಷೇತ್ರದಲ್ಲಿ ಅಧ್ಯಯನವನ್ನು ಮುಂದುವರಿಸಲು ಹೆಚ್ಚು ಸೂಕ್ತವೆಂದು ತಿಳಿಯುತ್ತಾರೆ. ಉದ್ಯೋಗದಾತರು ಸಾಮಾನ್ಯವಾಗಿ ಮತ್ತು ಉದ್ದೇಶಪೂರ್ವಕವಾಗಿ ಇತಿಹಾಸದ ಅಧ್ಯಯನವು ಬೆಳೆಸುವ ಸಾಮರ್ಥ್ಯಗಳನ್ನು ಹೊಂದಿರುವ ವಿದ್ಯಾರ್ಥಿಗಳನ್ನೇ ಹುಡುಕುತ್ತಾರೆ. ಇದಕ್ಕೆ ಕಾರಣ ತಿಳಿಯುವುದು ಕಷ್ಟವೇನಲ್ಲ: ಇತಿಹಾಸದ ವಿದ್ಯಾರ್ಥಿಗಳು ಗತಕಾಲದ ವಿವಿಧ ಘಟ್ಟಗಳನ್ನು ಮತ್ತು ಅದರ ವಿವಿಧ ಸಮಾಜಗಳನ್ನು ಅಧ್ಯಯನ ಮಾಡುವುದರ ಮೂಲಕ ಒಂದು ವಿಶಾಲವಾದ ದೃಷ್ಟಿಕೋನವನ್ನು ಬೆಳೆಸಿಕೊಂಡಿರುತ್ತಾರೆ. ಇದು ಅವರಿಗೆ ವಿವಿಧ ಕಾರ್ಯಸನ್ನಿವೇಶಗಳಲ್ಲಿ ಅಗತ್ಯವಾದ ಕಾರ್ಯವ್ಯಾಪ್ತಿ ಮತ್ತು ನಮ್ಯತೆಯನ್ನು ಒದಗಿಸಿಕೊಡುತ್ತದೆ. ಅವರು ಸಂಶೋಧನಾ ಕೌಶಲಗಳನ್ನು, ಮಾಹಿತಿಯ ಮೂಲಗಳನ್ನು ಗುರುತಿಸುವ ಮತ್ತು ಮೌಲ್ಯಮಾಪನ ಮಾಡುವ ಸಾಮರ್ಥ್ಯವನ್ನು, ವಿವಿಧ ವ್ಯಾಖ್ಯಾನಗಳನ್ನು ಗುರುತಿಸುವ ಮತ್ತು ಮೌಲ್ಯಮಾಪನ ಮಾಡುವ ಮಾರ್ಗಗಳನ್ನು ಬೆಳೆಸಿಕೊಂಡಿರುತ್ತಾರೆ. ಇತಿಹಾಸದ ಅಧ್ಯಯನ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳುವುದು ಮೂಲಭೂತ ಬರೆವಣಿಗೆ ಮತ್ತು ಮಾತನಾಡುವ ಕೌಶಲಗಳನ್ನು ಉತ್ತಮಪಡಿಸುತ್ತದೆ. ಅಲ್ಲದೆ ಗುರುತಿಸುವ, ಮಾಪನಮಾಡುವ ಹಾಗೂ ಒಲವುಗಳನ್ನು ವಿವರಿಸುವ ಸಾಮರ್ಥ್ಯಗಳ ಅಗತ್ಯವಿರುವ ಸಾರ್ವಜನಿಕ ಮತ್ತು ಖಾಸಗಿ ವಲಯಗಳಲ್ಲಿನ ಅನೇಕ ವಿಶ್ಲೇಷಣಾತ್ಮಕ ಆವಶ್ಯಕತೆಗಳಿಗೆ ನೇರವಾಗಿ ಸಂಬಂಧಿಸಿರುತ್ತವೆ. ಇತಿಹಾಸವು ತಾಂತ್ರಿಕ ಕ್ಷೇತ್ರಗಳಂತೆ ಒಂದು ನಿರ್ದಿಷ್ಟ ಉದ್ಯೋಗ ಕ್ಷೇತ್ರಕ್ಕೆ ಬೆರಳು ಮಾಡಿ ಕೊಂಡೊಯ್ಯುವುದಿಲ್ಲವಾದರೂ ವಿವಿಧ ರೀತಿಯ ಕೆಲಸಗಳಲ್ಲಿ ಮತ್ತು ವೃತ್ತಿಪರ ಸನ್ನಿವೇಶಗಳಲ್ಲಿ ಇತಿಹಾಸದ

ಅಧ್ಯಯನವು ಅಮೂಲ್ಯ ಎಂಬುದು ಪ್ರಶ್ನಾತೀತವಾದುದು. ಆದರೆ ಇತಿಹಾಸವು ವಿದ್ಯಾರ್ಥಿಗಳನ್ನು ನಿರ್ದಿಷ್ಟವಾಗಿ ಅವರ ವೃತ್ತಿಯಲ್ಲಿ ದೂರದ ಪ್ರಯಾಣಕ್ಕೆ ಸಿದ್ಧಪಡಿಸುತ್ತದೆ. ಹೊಂದಾಣಿಕೆ ಮತ್ತು ಉದ್ಯೋಗದ ಮೊದಲ ಹಂತದಿಂದಾಚೆಗಿನ ಪ್ರಗತಿಗೆ ಪೂರಕವಾದ ಗುಣ ಇದಕ್ಕೆ ಇದೆ. ನಮ್ಮ ಸಮಾಜದಲ್ಲಿ ಇತಿಹಾಸದ ಅಧ್ಯಯನಕ್ಕೆ ಆಕರ್ಷಿತರಾದ ಅನೇಕರು ಅದರ ಪ್ರಸ್ತುತತೆಯನ್ನು ಕುರಿತು ತಲೆಕೆಡಿಸಿಕೊಳ್ಳುತ್ತಾರೆ ಎಂಬ ಮಾತನ್ನು ಅಲ್ಲಗಳೆಯಲಾಗದು. ನಮ್ಮ ಬದಲಾಗುತ್ತಿರುವ ಆರ್ಥಿಕ ವ್ಯವಸ್ಥೆಯಲ್ಲಿ ಬಹಳಷ್ಟು ಕ್ಷೇತ್ರಗಳಲ್ಲಿ ಭವಿಷ್ಯದ ಉದ್ಯೋಗಗಳ ಕುರಿತು ಕಾಳಜಿ ಇದೆ. ಆದಾಗ್ಯೂ, ಐತಿಹಾಸಿಕ ತರಬೇತಿ ಎಂಬುದು ಲೋಲುಪತೆಯ ವಿಷಯವಲ್ಲ; ಅದು, ಹಲವಾರು ಉದ್ಯೋಗಗಳಿಗೆ ನೇರವಾಗಿ ಅನ್ವಯಿಸುವಂತಹುದು ಮತ್ತು ನಮ್ಮ ದುಡಿಯುವ ಜೀವನದಲ್ಲಿ ಸ್ಪಷ್ಟವಾಗಿ ಸಹಾಯಕ್ಕೆ ಬರುವಂತಹುದು.

ಇತಿಹಾಸವನ್ನು ಏಕೆ ಅಧ್ಯಯನ ಮಾಡಬೇಕು? ಏಕೆಂದರೆ ಮೂಲತಃ ನಾವು ಮಾನವ ಅನುಭವದ ಪ್ರಯೋಗಾಲಯಕ್ಕೆ ಪ್ರವೇಶ ಪಡೆಯಬೇಕು. ನಾವು ಅದನ್ನು ಚೆನ್ನಾಗಿ ಕಲಿತದ್ದೇ ಆದರೆ, ಹಾಗೆಯೇ ಬಳಸಬಲ್ಲ ಚಿಂತನಾ ಅಭ್ಯಾಸಗಳನ್ನು ಮೈಗೂಡಿಸಿಕೊಂಡರೆ, ಅಲ್ಲದೆ ನಮ್ಮದೇ ಬದುಕುಗಳನ್ನು ಪ್ರಭಾವಿಸುವ ಶಕ್ತಿಗಳ ಕುರಿತು ಮೂಲಭೂತ ಮಾಹಿತಿಯನ್ನು ಪಡೆದುಕೊಂಡರೆ, ನಾವು ಸಂಬದ್ಧವಾದ ಕೌಶಲಗಳು, ಮಾಹಿತಿಯುಕ್ತ ಪೌರತ್ವ, ವಿಮರ್ಶಾತ್ಮಕ ಚಿಂತನೆ, ಮತ್ತು ಸರಳ ಗ್ರಹಿಕೆಯ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳುತ್ತೇವೆ. ಇತಿಹಾಸದ ಪ್ರಯೋಜನಗಳು ವಿಭಿನ್ನವಾದವು. ಇತಿಹಾಸದ ಅಧ್ಯಯನವು ಕೆಲವು ಅಕ್ಷರಶಃ 'ಮಾರಾಟಯೋಗ್ಯವಾದ' ಕೌಶಲಗಳನ್ನು ಬೆಳೆಸಿಕೊಳ್ಳಲು ಸಹಾಯಮಾಡಬಲ್ಲದು. ಆದರೆ ಇತಿಹಾಸದ ಅಧ್ಯಯನವನ್ನು ಉಪಯುಕ್ತತೆಯ ದೃಷ್ಟಿಕೋನದಿಂದ ಸೀಮಿತಗೊಳಿಸಬಾರದು. ಸದ್ಯದ ಪರಿಸರದಲ್ಲಿ ಬದಲಾವಣೆಗಳು ಮತ್ತು ಸಂಬಂಧಗಳನ್ನು ಕುರಿತ ವೈಯಕ್ತಿಕ ನೆನಪುಗಳಿಗೆ ಸೀಮಿತವಾಗಿರುವ ಆದರೆ ಬಾಲ್ಯಾವಸ್ಥೆಯಿಂದಾಚೆಗೆ ಕ್ರಿಯಾಶೀಲವಾಗಿರುವ ಇತಿಹಾಸವು ಅವಶ್ಯಕ. ಇನ್ನೂ ಕೆಲವು ಇತಿಹಾಸವು ಸೌಂದರ್ಯ, ಹೊಸ ಅನ್ವೇಷಣೆಯ ಆನಂದ, ಅಥವಾ ಬೌದ್ಧಿಕ ಸವಾಲುಗಳನ್ನು ಒಳಗೊಂಡ ವೈಯಕ್ತಿಕ ಅಭಿರುಚಿಯದ್ದಾಗಿರುತ್ತದೆ. ಅನಿವಾರ್ಯವಾದ ಕನಿಷ್ಟ ಮತ್ತು ಆಳವಾದ ಬದ್ಧತೆಯ ನಡುವೆ ಇನ್ನೊಂದು ರೀತಿಯ ಇತಿಹಾಸವಿದೆ. ಇದು ತೆರೆದುಕೊಳ್ಳುತ್ತಿರುವ ಮಾನವನ ಗತಕಾಲವನ್ನು ಸಂಚಿತ ಕೌಶಲಗಳ ಮೂಲಕ ವ್ಯಾಖ್ಯಾನಿಸುವುದರಿಂದ ಜಗತ್ತು ಹೇಗೆ ಕಾರ್ಯನಿರ್ವಹಿಸುತ್ತದೆ ಎಂಬುದರ ನಿಜವಾದ ತಿಳಿವಳಿಕೆಯನ್ನು ಒದಗಿಸುತ್ತದೆ.

